# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1533

ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

*****

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಲ್ಲಿ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಕಾಯ್ದಿರಿಸಲಾದ ಹಣವೆಷ್ಟು ಮತ್ತು ಬಿಡುಗಡೆ ಮಾಡಲಾದ ಹಣವೆಷ್ಟು;</td><td>ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಕಳೆದ ಮೂರು ವರ್ಷಗಳಿಂದ ಬಿಡುಗಡೆಯಾಗಿರುವ ಅನುದಾನದ ವಿವರ ಈ ಕೆಳಕಂಡಂತಿದೆ.<br><br>
<table>
<tr><th>ಆರ್ಥಿಕ ವರ್ಷ</th><th>ಆಯವ್ಯಯದಲ್ಲಿ ಕಾಯ್ದಿರಿಸಲಾದ ಅನುದಾನ (ರೂ.ಕೋಟಿಗಳಲ್ಲಿ)</th><th>ಮಂಡಳಿಗೆ ಬಿಡುಗಡೆ ಮಾಡಿದ ಅನುದಾನ (ರೂ.ಕೋಟಿಗಳ)</th></tr>
<tr><td>2017-18</td><td>1000.00</td><td>500.00 *</td></tr>
<tr><td>2018-19</td><td>1000.00</td><td>1300.00</td></tr>
<tr><td>2019-20</td><td>1500.00</td><td>1125.00</td></tr>
</table>
<br>* 2017-18ನೇ ಸಾಲಿನಲ್ಲಿ ಪರಿಷ್ಕೃತ ಆಯವ್ಯಯದಲ್ಲಿ ಒದಗಿಸಲಾದ ಅನುದಾನ ರೂ.800.00 ಕೋಟಿಗಳು ಸರ್ಕಾರದಿಂದ ಬಿಡುಗಡೆಯಾಗಿದ್ದು, ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯು ಏಪ್ರಿಲ್-18ರ ಮಾಹೆಯಲ್ಲಿ ರೂ.300.00 ಕೋಟಿಗಳನ್ನು ಖಜಾನೆಯಿಂದ ಡ್ರಾ ಮಾಡಿದ್ದು, 2018-19ನೇ ಸಾಲಿನಲ್ಲಿ ಬಿಡುಗಡೆಯಾದ ಅನುದಾನವಾಗಿ ನಮೂದಿಸಲಾಗಿದೆ.</td></tr>
<tr><td>ಆ)</td><td>ಆಯವ್ಯಯದಲ್ಲಿ ನಿಗದಿಪಡಿಸಿದ ಮೊತ್ತವನ್ನು ಬಿಡುಗಡೆ ಮಾಡದಿರಲು ಕಾರಣಗಳೇನು;</td><td>ಕಳೆದ ಮೂರು ವರ್ಷಗಳಲ್ಲಿ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನ ಬಿಡುಗಡೆಯಾಗಿರುವ ವಿವರಗಳು ಈ ಕೆಳಕಂಡಂತಿದೆ:-<br>2017-18ನೇ ಸಾಲಿನಲ್ಲಿ ಆಯವ್ಯಯದಲ್ಲಿ ರೂ.1000 ಕೋಟಿಗಳನ್ನು ನಿಗದಿಪಡಿಸಿದ್ದು, ಆರ್ಥಿಕ ಇಲಾಖೆಯು ಪರಿಷ್ಕೃತ ಆಯವ್ಯಯದಲ್ಲಿ ಸದರಿ ಅನುದಾನವನ್ನು ರೂ.800 ಕೋಟಿಗಳಿಗೆ ಮಿತಿಗೊಳಿಸಿರುವ ಕಾರಣ ರೂ.200 ಕೋಟಿಗಳು ಬಿಡುಗಡೆಯಾಗಿರುವುದಿಲ್ಲ.<br>2018-19ನೇ ಸಾಲಿನ ಆಯವ್ಯಯದಲ್ಲಿ ನಿಗದಿಯಾದ ರೂ.1000 ಕೋಟಿ ಅನುದಾನವನ್ನು ಪೂರ್ಣವಾಗಿ ಮಂಡಳಿಗೆ ಬಿಡುಗಡೆಗೊಳಿಸಲಾಗಿದೆ.<br>2019-20ನೇ ಸಾಲಿನಲ್ಲಿ ಮಂಡಳಿಯಲ್ಲಿ ಲಭ್ಯವಿರುವ ಆರಂಭಿಕ ಶಿಲ್ಕು ಸೇರಿ ಆಯವ್ಯಯದಲ್ಲಿ ನಿಗದಿಯಾದ ಅನುದಾನದಲ್ಲಿ ಮೂರು ಕಂತುಗಳ ಅನುದಾನವನ್ನು ಬಿಡುಗಡೆಗೊಳಿಸಿದ್ದು, ಒಟ್ಟು ಅನುದಾನದಲ್ಲಿ ಶೇ.75 ರಷ್ಟು ಅನುದಾನ ವೆಚ್ಚವಾಗದ ಹಿನ್ನೆಲೆಯಲ್ಲಿ ನಾಲ್ಕನೇ ಕಂತಿನ ಅನುದಾನವು ಬಿಡುಗಡೆಯಾಗಿರುವುದಿಲ್ಲ.</td></tr>
</table>

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | **ಇದರಿಂದ ಆ ಭಾಗದ ಅಭಿವೃದ್ಧಿಗೆ ತೊಡಕಾಗುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿಲ್ಲದಿರಲು ಕಾರಣಗಳೇನು?** | ಆ ಭಾಗದ ಅಭಿವೃದ್ಧಿಗೆ ತೊಡಕಾಗುತ್ತಿರವುದನ್ನು ಗಂಭೀರವಾಗಿ ಪರಿಗಣಿಸಲಾಗಿದೆ. ಆದರೆ, ಅನುಷ್ಠಾನದಲ್ಲಿ ಉಂಟಾಗುವ ಸಮಸ್ಯೆಗಳು, ಸ್ಥಳದ ಸಮಸ್ಯೆ ಹಾಗೂ ಜನಪ್ರತಿನಿಧಿಗಳು ಪದೇ ಪದೇ ಕಾಮಗಾರಿಗಳ ಬದಲಾವಣೆ ಮುಂತಾದ ಕಾರಣಗಳಿಂದ ಅನುಷ್ಠಾನದಲ್ಲಿ ವಿಳಂಬವಾಗಿರುತ್ತದೆ. |

**ಪಿಡಿಎಸ್ 26 ಹೆಚ್‌ಕೆಡಿ 2021**

**(ಡಾ॥ ನಾರಾಯಣಗೌಡ)**
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.